ಬಿಡಿಮುತ್ತು : ... ...೪

# 'ಕಾಲದ ಕರೆ'



ಗಂಗಾಧರ ಚಿತ್ತಾಲ

ಪರ್ಣಕುಟಿ ಗ್ರಂಥಮಾಲೆ
ಗೋಕರ್ಣ

ಜುಲೈ ೧೯೪೮

ಸಂಪಾದಕರು :
ವಿ. ಜಿ. ಭಟ್ಟ, ಎಂ. ಎ.
ಗೌರೀಶ ಕೈಕಿಣಿ.

ಸಂಚಾಲಕರು :
ಶಾ. ಗ. ಗೋಪಿ

ನಮ್ಮ ಮಾರಾಟಗಾರರು :
**ಸಮಾಜ ಪುಸ್ತಕಾಲಯ, ಧಾರವಾಡ**



**ಕ್ರಯ : ಒಂದು ರೂಪಾಯಿ**

ಮುದ್ರಕರು :
ಎಸ್. ಎಮ್. ಕುಲಕರ್ಣಿ
ಲಲಿತ ಮುದ್ರಣಾಲಯ
ಧಾರವಾಡ

ಪ್ರಕಾಶಕರು :
ಎಚ್. ಬಿ. ಸವಲೂರ್,
ಮ್ಯಾನೇಜರ,
ಹಿಂದಮಾತಾ ಮುದ್ರಣಾಲಯ
ಧಾರವಾಡ
(ಕರ್ನಾಟಕ ಗ್ರಂಥಮಾಲೆಯ ಪರವಾಗಿ)

# ಕವನಗಳ ಕ್ರಮ

ನೂರು ಮಾತನಾಡಿ ಕರೆಯು
ತಿಹುದು ಜೀವಸೃಷ್ಟಿಯು
ನೂರು ಭಾವವಾಗಿ ತೆರೆಯು
ತಿಹುದು ಆತ್ಮದೃಷ್ಟಿಯು

ಭಾವ ಭಾವ ಬೇಡುತಿಹುದು
ಹಾಡಿನಂಥ ಮಾತನೆ
ಇಲ್ಲದಿರಲು ಮರಣದಂಥ
ಮೂಕಮೌನ ಯಾತನೆ

ಆಶೆ ಹರಿಯುತಿಲ್ಲಿ ಹಾಡು
ಇಲ್ಲ ಬೇರೆ ಭಾಷೆಯು
ಸೃಷ್ಟಿಯೆದೆಯ ಪಡಿನುಡಿಯಲು
ಜೀವಕೇನೊ ಆಶೆಯು

# ಆಹ್ವಾನ

ಚೈತ್ರಯಾತ್ರೆಗೆಂದೊ ಏನೊ ಬಂದೆ ಜನ್ಮ ತಾಳಿ
ಬೆನ್ನೆ ಭಾನು-ಉದಯವಿತ್ತು ಅಭಯವೆಂದು ಸಾರಿ
ವಿಶ್ವ ಕರೆಯುತಿತ್ತು ವಿಜಯರಂಗದಂತೆ ತೋರಿ :

“ ಕಾಲಗರ್ಭದಲ್ಲಿ ಬಾಲತೇಜ ಬೆಳೆವುದೊಂದು
ಅದುವೆ ನಿನ್ನ ಧ್ಯೇಯದೋಜವದುವೆ ಭಾಗ್ಯಬಿಂದು
ಜೀವಪಥವ ತೆರೆಯೊ ಆ ದಿವ್ಯ ದಿಶೆಯಲಿಂದು.

ದಿನವು ಬಾನ ಬಸಿರಿನಿಂದ ಬೆಳಕು ಬೆಳೆವ ವೈಭವಾ
ಸಂಧ್ಯೆ ಇಂದ್ರಮಾಯೆಯಿಂದ ಬರೆವ ಸ್ವರ್ಣರಾಗವಾ

ನಿಶೆಯು ನೀಲವಾಗಿ ತೆರೆವ ತಾರಾಂಕಿತ ಶಾಂತಿಯು
ಉಷೆಯು ಮೋಹಮುಗ್ಧೆಯಂತೆ ತಳೆವ ಅರುಣ ಕಾಂತಿಯು

ಭಾಷೆ–ಭಾವವೇನಿದಾವ ಚೈತನ್ಯ ಲೀಲೆಯೋ
ಕಂಡಕಡೆಗು ಚೆಲುವ ಒಲವ ನಲವ ಮಾಲೆ ಮಾಲೆಯೋ

ಜೀವಮಾಯೆ ಮೋಹಕಾಯೆ: ಚಿರನೂತನ ಚೇತನೆ
ದಿನವು ಈ ಧರಿತ್ರಿಮಾತೆ ಒರೆಯುವಳಾ ಮಾತನೆ.

ಬಾನ ನೀಲಧ್ಯಾನವದನೆ ಕಂಡು ನಿತ್ಯ ನಲಿವುದೋ
ತನ್ನ ಹರ್ಷದಮೃತಸ್ಪರ್ಶವದಕೆ ಗಾಳಿ ತರುವದೋ.

ಪಾರವಾರ ತೆರೆವುದೋ ಪ್ರಫುಲ್ಲ ಜಲೋಲ್ಲಾಸವಾ
ಕಾಲ ಮಾಸ ಮಾಸ ಕುಣಿವ ಋತುವಿಲಾಸರಾಸವಾ

" ಎಂಥ ಭವ್ಯ ರಂಗವಿದೋ
ದಿನವು ದಿವ್ಯ ಸಂಗವಿದೋ–
ಜೀವ ಅರ್ಥಾಂಗ ಬಲಿವನು
ನಡೆಯೊ ಮುಂದೆ, ಪಡೆಯೊ ಒಂದೆ ಸಿದ್ಧಿಯಮರ ಫಲವನು "

–ಎಂದು ಜೀವದಾಳದಿಂದ ಮಾರ್ಮೊಳಗಿ ಬಂದುದೋ
ಅವುದೇನೋ ಶಕ್ತಿ ದೇವಶಕ್ತಿಯಂತೆ ನಿಂದುದೋ.

ಆಶೆಯೋಘ ಸೆಳೆಯುತಿತ್ತು ಮುಗಿಲಗಂಗೆಯುದರಕೆ
ಎದೆಯ ಬಯಕೆ ಬೆಳೆಯುತಿತ್ತು ಬಿದಿಗೆ ಚಂದ್ರನಧರಕೆ.

ಪ್ರಾಣ ಚೇತರಿಸಿ ನಿಂತು ವೀರಧೀರನಂದದಿ
" ಎಂದು ಬಹುದೊ ? " ಎಂದು ಕಾಯುತಿದ್ದ ದಿಗ್ದಿಗಂತದಿ !

# ದಿಗ್ಭ್ರಾಂತ

ಕರೆವ ದಾರಿ ಬೇರೆ, ಮತ್ತೆ
ತೆರೆವ ದಾರಿ ಬೇರೆಯೊ !
ಹಾತೊರೆದು ನಡೆವರನ್ನು
ಹಾದಿಗೆಡಿಸುತಾರೆಯೊ ?

ಅವುದೇನೊ ಭಾವಲೋಕ
ದೇವಲೋಕದಂದದಿ
ತಾನೆತಾನೆಯಾಗಿ ಬೆಳೆದು
ಸೆಳೆದು ಪ್ರೇಮಬಂಧದಿ,
‘ ಬಾ ’ ಎಂದು ನಿಲಲು ಅಂದು
ಏಕೊ ಹೇಳಕೇಳದೆ
ನೀನಾಗಿಯೆ ಕೈಗೆ ಕೈಯ-
ನಿತ್ತು ನಡೆಸಿ, ಕಾಣದೆ
ನೂಕಿ ನಡೆವರೇನೊ ಕ-
ತ್ತಲೆಯ ಹಾಳು ಕೊಳ್ಳಕೆ ?
ಬೆಳಕ ಸೀಮೆ ತುಳಿದ ಕಾಲು
ಹೇಸಿ ಕೆಸರ ಹಳ್ಳಕೆ ?

ಏನೊ ಕೈಯ ಮಾಟವಯ್ಯೊ
ಏನೊ ಕಣ್ಣುಕಟ್ಟಿದು –
ಎಲ್ಲೊ ಎಂದು ಹೊರಟ ಹಾದಿ
ಎಲ್ಲೊ ಬಂದು ಹತ್ತಿತು !
ದಿನದ ನಡೆಯು, ದಿನದ ನಿಲುವು,
ದಿನದ ಹವಣು-ಹಂಬಲ –
ಕಣ್ಣು ಮುಚ್ಚಿ ತೆರೆಯಲೀಗ
ಕೊಸರಂತೇಕೊ ಬೆಂಬಲ ?

ಬೆಳಕ ಹಬ್ಬವಾಗಿ ಹಗಲು
ಬೆಳೆಯುತಿತ್ತು ಈಗಲೆ :
ಬಂಜೆ ಸಂಜೆಯಾಗಿ ಸಾಯು
ತಿಹುದು ! – ಕೊನೆ ಇದಾಗಲಿ ?

ಗಾಸಿಗೊಂಡ ಜೀವ ನೆನಹು-
ನಾಡನರಸಿ ತೊಳಲಿತು
ಎಲ್ಲಿ ತಡೆದೆ, ಎಲ್ಲಿ ಕೆಡೆದೆ
ನಯ್ಯೊ ಎಂದು ನರಳಿತು.
ಗಾಳಿಯೋಟ ಬೆಳಕಿನಾಟ
ನೆಲದ ಜಲದ ಲೀಲೆಯು
ದಾರಿಯುದ್ದ ನಡೆಯುತಿರಲು,
ಹೂವ ಹೂವ ಮಾಲೆಯು
ಕಣ್ಣು ತುಂಬಿ ಹರಹಿತೇಕೊ,
ಹಿಗ್ಗಿ ನಡೆದೆನಂಚಿಗೆ ;
ನುಂಗಿತಯ್ಯೊ ಕಣಿವೆಯಾಳ -
ಏನು ಹೊಂಚು ಹಂಚಿಕೆ !

ಹಾರಯಿಸುವ ಹಸುಳೆ ಜೀವ
ಬಲ್ಲುದೇನು ಹಾದಿಯು
ಉಬ್ಬು-ತಗ್ಗು , ಹದವು , ಹದನು ?
ಧ್ಯೇಯದ ಭವ್ಯೋದಯ
ವೊಂದೆ ನಂಬಿ ನಡೆಯಿತದು
ಹೂವುಗನಸ ತೋರದೆ
' ಇತ್ತ ಬಾರೊ , ಹೀಗೆ ಬಾರೊ '
ಎಂದು ಕರೆಯಬಾರದೆ ?
ತಪ್ಪಿದಡಿಗೆ ತಳವಿಲ್ಲದ
ಪಾತಾಳವೆ ತೆರೆದರೆ

ಬಾಳಿಗೇನು ಅರ್ಥ ? ಬರಿಯ
ಸ್ವಾರ್ಥ, ವಿಧಿಯ ಕೈಸೆರೆ !

ತಪ್ಪಾಯಿತು ಒಪ್ಪಿದೆ ಎಂ-
ದಾಸು ದಿನವು ಅತ್ತರೂ
ತಪಿಸಿ ಜಪಿಸಿ ನವೆದು ನವೆದು
ಎಷ್ಟು ಬಿದ್ದು ಸತ್ತರೂ ,
' ಬೇಡಲೇಕೊ ಕಾಡಲೇಕೊ
ಇನ್ನು ನರಕವೇ ಗತಿ '
ಎಂಬ ತೆರದಿ ನಡೆದು ನಿಂತೆ,
ಪಡೆದೆ ನಿನ್ನ ಪದಹತಿ !
ಇದಾವ ತೆರ ಪರೀಕ್ಷೆಯೋ
ಇದಾವ ಪರುಶ–ಪೌರುಷ
ವೀರ ಧೀರ ಜೀವವೊಂದು
ಒಂದೆ ವಿಕಟ ವಿಧಿವಶ !

ದಮನ ಸಾಕು, ಶಮನ ಬೇಕು,
ಓ ಕಾರುಣ್ಯಾಸನ !
ಏನು ಬಂತು ವಿಧಿಸೆ ಇಂತು
ಬರಿಯ ಘೋರ ಶಾಸನ ?
ದೀನನಾಗಿ ಲೀನನಾಗಿ ,
ಕ್ಷಮೆಯು ಎಂದು ಒದುವದೋ
ತಾಯಂತೆಯೆ ಪ್ರಿಯ ತಡವಿ
ಉದ್ಧಾರವ ತರುವದೋ
ಎಂದು ನಿಂತೆ – ಆಹಾ ಬಂತೆ
ಬಿಡಿಸಲು ಈ ಬಂಧನ !
ದೇವದೂತೆ , ಜೀವಮಾತೆ !
ಇರಲಿ ನಿನಗೆ ವಂದನ !

# ಹೊಸ ಹುಟ್ಟು

ಮುಗಿಯಿತಿನ್ನು ಈ ಜಗದ ಬಂಧ , ಇನ್ನಿಲ್ಲ ಹಿಂದು ಮುಂದು.
ತಾರೆಗಳ ಲೋಕಕೂ ತುಡಿಯುತಿಪ್ಪ ಮನದಾಸೆ ಕಡಿಯಿತಿಂದು

ತುಳುಕು ಬಾಳು ಹಾ ಗಳಕನೇಕೊ ಕೈಯಿಂದ ಜಾರಿ ಚೆಲ್ಲಿ
ಮಣ್ಣ ಕೂಡಿತಿನ್ನುಳಿದುದೇನು ?– ತಬ್ಬಲಿಯೊ ಜೀವಪಕ್ಷಿ.

ತೆರವೋ ತೆರವು ಈ ಜಗವ ಹರಹು. ತಾಯಂತೆ ಕಾಡ ನೆಲವೇ
ಜೀವಸಂಪದವ ಕಸಿದುಕೊಂಡು ವಿಧಿಯಂತೆ ನಿಂತಿತಲವೇ ! ....

ಸಿಡಿದೆದ್ದೆನೆಂದು ಬಿರುಗಾಳಿಯಂತೆ ದಿಕ್ಕಿಲ್ಲವತ್ತ ನಡೆಯೆ !
ಏಸು ನಡೆದರಿನ್ನೇಸು ಬೆಳೆವ ನೆಲ–ಬಾನ ಸೆರೆಯನೊಡೆಯೆ !

ಏಕೊ ಏನೊ ಹೊಸಹುಟ್ಟಿನಂತೆ ಮುಂಜಾವು ಬೆಳೆದು ಬಂತು.
ಬೆಳಕಾಡುತಿತ್ತು ಹಸುಗೂಸಿನಂತೆ. ಶುಭವಾಗಿ ಬಾಗಿ ನಿಂತು

ಕರೆದಿತ್ತು ಬಾನು. ಎಡಬಲಕು ಮರದೊಳೆಲಿ ಎಲೆ ಹೂವು ಕೂ;
—ಇಂಥ ದಾರಿಯಿಂದೆ ನಡೆವೆನೆನಿಸಿತೋ ಮರೆತು ಎಂಥ ನೋವೂ.

# ನಾದೋನ್ಮಾದ

ಜೀವದುಂಬಿ ತೋಂತನವೆನುತಿರಲು ಮೃದು ಮೃದಂಗವು
ತರತರಂಗವಾಗಿ ತೆರೆಯುತಿರಲು ತಾಲರಾಗವು

ಮುಗ್ಧವಾಗಿ ಸೂಸುತಿರಲು ವೇಣು ಮೋಹನಾದವಾ
ಮೈದುಂಬಿ ತರುತಲಿರಲು ನರ್ತನೋನ್ಮಾದವಾ

ಸ್ನಿಗ್ಧಾಂಧವು ಸ್ಫುಟಿಸೆ, ಸೆಳೆದೆಳೆಯೆ ಭಾವಬಂಧನಾ
ರಾಸಕೆಂದು ನಿಂದರಂದು ರಾಧೆ ನಂದನಂದನಾ

ಮಧುವನವದು ಮುದದಿ ಮೈತುಂಬಿ ಹೂತು ನಲಿಯಿತು
ನೆಳಲ ನೀಡಿ ಶ್ಯಾಮಲ ತಮಾಲ ತಲೆಯನೊಲಿಯಿತು

ಲಹರಿ ಲಹರಿಯಾಗಿ ಕಂಪಿಸಿತು ಪವನವಾಹವು
ತರಲತರಂಗಿತವದಾಯ್ತು ಯಮುನ ಜಲ ಪ್ರವಾಹವು.

ಧಮನಿ ಧಮನಿ ಧುಮುಧುಮಿಸಿಸೆ ನಾದಸೋಲ್ಲಾಸವು
ತರಂಗೋತ್ತರಂಗವಾಗಲಂಗ ವಿನ್ಯಾಸವು ,

ನಾದದುನ್ಮಾದವೇರಿ ಸುಪ್ತ ಚೈತನ್ಯವೇ
ಮದದಲೆದ್ದು ತೂಗಿದಂತೆ ಮೈಯ ನಿಲುವು ತೂಗಲು,
ತೋಳುಗಳೂ ತೂರಿ ತೆರೆಗಳಾಗಿ ಬಳುಕಿ ತೇಲಲು,

ನಾದ-ಸಂಮೋಹನಕ್ಕೆ ಮೈಮನಗಳ ಸೋಲಿಸಿ
ಆದರ ತೀವ್ರ ಮಾಧುರ್ಯಕೆ ಸೋತು ಕಣ್ಣು ಜೋಲಿಸಿ

ನಾದ ಮಾಯೆ ತೂಗಿದತ್ತ
ರಾಗಗತಿಯು ನೂಗಿದತ್ತ
ತಾಳಗತ್ತು ಕುಣಿಸಿದಂತೆ
ಹಾಡ ಮುರುಕ ಮಣಿಸಿದಂತೆ
ಮೋಹಮಂತ್ರ ಮುಗ್ಧರಂತೆ ಸ್ವಚ್ಛಂದ ಮಣಿವರು
ಉನ್ಮತ್ತರಂತೆ ಮೈಮರೆದು ಸುತ್ತು ಕುಣಿವರು

ತಾನತಾನವೇರಿ ನಾದ ತುಂಬೆ ಗಗನವಂಗಣಾ
ತನ್ನ ಗತಿಗೆ ತಾನೆ ಮದಿಸಿ ಕುಣಿಯೆ ರಾಗ ರಿಂಗಣಾ

ಮೃದು ಮೃದಂಗ ಸ್ಪಂದನಕ್ಕೆ ಜಗವೆ ಜುಮ್ಮೆಂದಿರೆ
ನಾದಪಾನ ಮದವದೇರಿ ಗಿಮ್ಮೆಂದು ನಿಂದಿರೆ

ವೇಣುವಹಾ ಮುಗ್ಧವಾಣಿಯಿಂದ ಒಲವ ತೊರೆಯಿತು
ಮುಗುದೆಯೆದೆಯು ಓತು ಸೋತು ಕರೆವಂತೆಯು ಕರೆಯಿತು !

# ವೇಗಲಹರಿ

ಅಪ್ಪಿದೋ ಮುಗಿಲ ಬಿತ್ತರವ ಕನಸನು ಎದೆಯು
ಆಳದೊಳಗಿರಿಸಿ. ನಿಲುಕೀತೆಂಬ ಎಣಿಕೆಯಲಿ
ತನ್ನ ತಾನೇ ಮರೆತು ನಿಂತ ನೀರಿನ ಬದುಕು
ಹಂಗಡಿದು ಹಾವಸೆಯೊಳಡಗುತಿದೆ. ಸಲಿಲ-ಚೇ-
ತನಕೆ ಗತಿಹೀನತೆಯು ಮೂರ್ಛೆ ಬಂದಾವರಿಸುತಿದೆ.
ನನ್ನ ಬಾಳೂ ಕೂಡ
ಹುಸಿ ಚಿಂತನೆಯ ಮುಬ್ಬು ಹಬ್ಬಿ ಬರಿ
ನಿರ್ಗತಿಕತೆಯ ದುಸ್ವಪ್ನದಲಿ ಲೋಪಗೊಳ್ಳುತಿದೆ
ಸಲ್ಲದೆಣಿಕೆಗೆ ಸಿಲುಕಿ!

ಸಾಕು ಈ ವಿಫಲತೆಯು. ವೇಗಮುದ್ವೇಗವೇ
ನಾಡಿನಾಡಿಯಲೀಗ ಧುಮ್ಮಿಕ್ಕುತಿದೆ. ಇಗೋ
ಬಿರುಗಾಳಿಯಾಗುವೆನು! ನುಗ್ಗುವೆನು ಏಳು-ಕಡ
ಲುಗಳ ತೊತ್ತಳ ತುಳಿದು. ಧಿಗ್ಗನೆಯೆ ದಿಗ್ದ್ವಾರ
ಗಳನೆಲ್ಲ ತೂರೊಗೆದು ಕೂಗುವೆನು ಪ್ರಳಯ ರೋ-
ಷದಲಿ. ಬಾನ್ಮೊಗವು ಭಯಗೊಂಡು ಬಿಳುಪೇರಿ!
ಆಹಾ ಉನ್ಮತ್ತತೆಯೆ! ಬೊಬ್ಬಿರಿದು ಉಡ್ಡಾಣ
ಗೈಯುವೆನು ಮರುತ ಮಂಡಲಕೆ. ಪಕಳೆಗಳಂತೆ
ಊದಿ ತೂರುವೆನಲ್ಲಿ ಬೆಳೆವ ಮೇಘಾವಳಿಯ.
ಮಲಯ ಮಂದರ ಮೇರು ಮಲೆತು ನಿಂತರು ಈಡೆ
ನನ್ನ ಈ ರುದ್ರ-ಭೈರವ ಗತಿಗೆ? ಇಗೊ ಕಾನು
ಚೀರುತಿದೆ ಕೋಳ ತೆಕ್ಕೆಗೆ ಸಿಕ್ಕಿ! ಎಲ್ಲಿಹು

ಕಲ್ಲೋಲ ಕಲೆಯುತಿದೆ, ಸ್ವೈರ-ದ್ರುತ ಪದಹತಿಗೆ
ತ್ರೈಭುವನವದರುತಿದೆ, ಬೆದರುತಿದೆ, ಮುದುರುತಿದೆ!

ವೇಗದುದ್ವೇಗವೇ ನಾಡಿನಾಡಿಯಲಿಳಿದು
ಧುಮ್ಮಿಕ್ಕುತಿದೆ. ಆಹಾ ಇನ್ನೂನು ಗತಿ ಬೇಕು
ಇನ್ನೂನು ಗತಿ ಬೇಕು! ಅಂತವಿಲ್ಲದನಂತ
ತೆರೆದರೂ ಅದರಂತ ಅರೆನಿಮಿಷದಲಿ ಪಡೆಯು
ವಂಥ ಪದಗತಿ ಬೇಕು! ಆಹಾಹಾ ವೇಗವೇ!
ಆಳು, ನನ್ನನ್ನಾಳು— ನಿನ್ನಿಂದೆ ಸಾರ್ಥಕತೆ
ನಿನ್ನಿಂದೆ ಸಫಲತೆಯು. ನನ್ನ ಸರ್ವಸ್ವವಾಗು!

# ಕಾಮೋದಯ

ಬೆಳೆದು ನಿಂತಿಹೆ ಹುಡುಗಿ !
ಕಂಡ ಕಂಡವರ ಎದೆ ಸೆಳೆದು ನಿಂತಿಹೆ ಮತ್ತೆ
ಎಳೆತನದ ಹೂವುಕಳೆ ಕಾಣಕಾಣುತೆ ಅಡಗಿ
ಕಾಮೋದಯದ ಉಷೆಯೆ ಮೈದಾಳೆ ಬಂದಂತೆ
ನಯನಾಭಿರಾಮವಾಗಿ !

ಇದು ಒಂದು ಋತುಮಾನ
ಹರೆಯು ಬಂದರೆ ನೆರೆಯೆ ಬಂದಂತೆ ಮೈಮನಕೆ !
ತೊನೆಯುತಿದೆ ಕಣ್ಗಳಲಿ ಬರುವ ಸುಗ್ಗಿಯ ತಾನ !
ನಿಲುವಿನಲು ಆರನೋ ಕಾಮ ನಿಂತಿಹ ಭಾವ
ಸುಳವುದವಿರಾಮವಾಗಿ !

ಏ ತರಳೆ ! ಏ ಮರುಳೆ !
ಸ್ವಾತಿ ಬರೆ ಮೌಕ್ತಿಕಕೆ ಶುಕ್ತಿ ಬಾಯ್ಬಿಡುವಂತೆ
ಜೀವದಾಳವೆ ಬಾಯಬಿಟ್ಟಿರಲು ಬಯಕೆಯಲಿ
ಮುಗ್ಧೆ ಚಂಚಲೆಯಾಗಿ ಘುಲ್ಲವಿಸಿ ನಿಂತಿರುವೆ
ಕಾಮವೇ ಪ್ರೇಮವಾಗಿ !

# ಮಿಲನ

ಜೀವವೇ ಕಣ್ಣಾಗಿ ಕಾದು ನಿಂತಿಹೆ. ಮನದೊ
ಳೊರತೆಯೊಂದಿದೆ ನೂರು ಯುಗದ ಆಸೆ
ಒಲವ ತೆಕ್ಕೆಗೆ ಮೈಯು ಹಸಿದು ಹಾತೊರೆಯುತಿದೆ
ಎಲೆ ನಲ್ಲೆ, ಇದು ಪುರಾತನ ಪಿಪಾಸೆ

ಅಣುರೇಣುವೂ ಕೂಗಿ ಕರೆಯುತಿದೆ ನಿನಗಾಗಿ
ಮಿಂಚಾಡೆ ಸಿಹಿನೋವಿನಂಥ ಸೆಳೆತ.
ಸೂರ್ಯ – ಚಂದ್ರರ ಬಂಧಿಸಿಹ ಮೋಹನವು ಇದುವೆ ;
ನಮ್ಮನೂ ಸಂಧಿಸಲು ಇದರ ಎಳೆತ !

ನೀ ಬಂದೆ ; ಬೇರೊಂದು ಲೋಕವನೆ ಕರೆತಂದೆ !
ಕಣ್ಣೊಳೊಡಮೂಡಿಹುದು ಎಂಥ ಭಾಷೆ ?
ಈ ಅಂತರವು ವಿರಹ. ಬಿಡು ಎದೆಗೊತ್ತುವೆನು –
ಜೀವಸಮ್ಮಿಲನವೇ ಜೀವವಾಸೆ !

# ನಾನು ಯಾರೊ, ನೀನು ಯಾರೊ!

ನಾನು ಯಾರೊ ನೀನು ಯಾರೊ
ಕಂಡು ಕೂಡಿ ಐದೊ ಆರೊ
ದಿನಗಳಷ್ಟೆ. ಆದರೂನು
ನಮ್ಮ ಸೆಳೆದ ಮೋಹವೇನು
ನಡುವೆ ಬೆಳೆದ ಸ್ನೇಹವೇನು!

ಸಾವಿರಾರು ದಿನಗಳಿಂದೆ
ಆಡಿ ಓಡಿ ಕುಣಿದು ಬಂದೆ
ಜೀವವಾಗಿ ನಲಿದೆವೆನ್ನು
ವಷ್ಟು ಬಳಕೆ ಸಲಿಗೆ ಗುರುತು
ತಾನೆ ತಾನೆ ಬೆಳೆಯಿತು!

ಇಬ್ಬರೂನು ಇದ್ದ ಹೊರತು
ಜೀವವೆಲ್ಲ ಹೋಳು ಹೋಳು
ಬಾಳುವೆಯೇ ಹಾಳು ಹಾಳು
ಎನಿಸುವಷ್ಟು ಏಕ ಜೀವ
ವಾಗಿ ಜೀವ ಬೆರೆಯಿತು!

ನಾನು ನೀನು ಕೂಡಿದಲ್ಲಿ
ಹುಚ್ಚು ಹುಚ್ಚೆ ಹಿಗ್ಗು ಚೆಲ್ಲಿ
ಬಾಳ್ಗೆ ಭರತಿ ಬಂದ ಹಾಗೆ
ಮನಕೆ ಮನವು ಮಾರುವೋಗಿ
ಬೇರೆ ಕಣ್ಣೆ ತೆರೆಯಿತು!

ನಾನು ಯಾರೊ ನೀನು ಯಾರೊ
ಕಂಡು ಕೂಡಿ ಐದೊ ಆರೊ
ದಿನಗಳಷ್ಟೆ ಆದರೂನು
ನಮ್ಮ ಸೆಳೆದ ಮೋಹವೇನು
ನಡುವೆ ಬೆಳೆದ ನೇಹವೇನು !

# 'ಆ ಎತ್ತರ ಈ ತಗ್ಗು'

ಆ ಎತ್ತರ ಈ ತಗ್ಗು
'ಅಯ್ಯೋ' ಎಂಬೀ ಹಲುಬು 'ಆಹಾ' ಎಂಬಾ ಹಿಗ್ಗು –
ಜೀವವು ಜೀಕುವದೇಕೋ ಈ ಎರಡರ ಅಂತರದಿ
ಬೀಳೇಳುವದೇ ಬಾಳಿಗೆ ಗತಿಯೆ ಭವ ಭವಾಂತರದಿ ?

ಎಲ್ಲಿಂದಲೊ ಬಂದೆವು ಇನ್ನೆಲ್ಲಿಗೊ ನಡೆದಿಹೆವಾವು !
ತುದಿಮೊದಲುಗಳೇನೋ. ನಡುವೆಯೆ ಪಯಣದ ನಗೆ – ನೋವು
ನೆಳಲಾಡುತ ತೊಳಲಾಡಿಸುತಿವೆ ಜೀವವನೆಳೆದಾಡಿ –
ಏನೋ ಏಕೋ ಹೇಗೋ ನಡೆದಿದೆ ಬಾಳಿನ ಮೋಡಿ !

ಚಿಕ್ಕೆಯ ಜಾತ್ರೆಯು ಜೀವದ ಸುತ್ತಲು ನೆರೆದಂತೊಮ್ಮೆ !
ಬೆಳಕಿನ ಕಣ್ಣೇ ಕಳೆಯಿತೊ ಎನೆ ಕತ್ತಲು ಇನ್ನೊಮ್ಮೆ !
ಏನಿದು ಎಂತಿದು ಎಂದು ನಿರುಕಿಸೆ ತೋರುವದೇನು ?
ಹುಟ್ಟಿನ – ಬದುಕಿನ – ಸಾವಿನ ಬಿಡಿಸದ ಒಗಟವೆ ತಾನು !

# ಈ ಮಣ್ಣ ಬಾಳು

ಈ ಮಣ್ಣ ಬಾಳು ಮಸಣಕ್ಕೆ ಕೂಳು
ಎದೆಯೊಡೆವ ಅಳುವು ಕೊನೆಗೆ
ಬದುಕಿನಾ ಸುತ್ತು ಸಾವಿನಾ ಕುತ್ತು –
ಈ ಬಾಳು ಲೀಲೆ ನಿನಗೆ ?

ಯುಗಯುಗಗಳೆಲ್ಲ ಉಸಿರಾಟವಿಲ್ಲ
ಮೊರಗಿಹವು ಮಣ್ಣ ಮರೆಗೆ
ಸುಖಸ್ವಪ್ನ ಕಾಮಿ ! ಇದು ರುದ್ರಭೂಮಿ !
ಹಸಿದಿಹುದು ನಿನ್ನ ಕೊಲೆಗೆ !

ಚೆಲುವಿದೆಯೊ ಇಲ್ಲಿ ಒಲವಿದೆಯೊ ಇಲ್ಲಿ
ನಲವೂನು ಇದೆಯೊ ಇಲ್ಲಿ.
ಮುಗಿಲಿನಾ ಜೇನ ರುಚಿ ; ಆದರೇನು
ಹಳಸುವವೊ ಬಾಯಿಯಲ್ಲಿ !

ಈ ನೆಲವ ನಂಬಿ ನಲಿಮಲಿವೆನೆಂಬಿ
ನಗೆ ಮೂರು ದಿನದ ಹೂವು !
ಆ ಕಂಪ ಹೂಳಿ ಇಗೊ ವಿಧಿಯ ದಾಳಿ
ಛೀಳಿಡಲು ಬಂತು ನೋವು !

ಇದ ನುಂಗಬಹುದು ತಂಗಲೂ ಬಹುದು
ಇಳೆಯಳಲನೆಲ್ಲ ಹೊತ್ತು –
ಈ ಹೆಣ್ಣ ಕಣ್ಣ ಮಳೆಬಿಲ್ಲ ಬಣ್ಣ
ನಂಬಿದರೆ ಬರದೆ ಮಿತ್ತು ?

ಇದು ದಿವ್ಯಲೋಕ, ಇದು ಭವ್ಯ ಲೋಕ :
ಇರಬಹುದು. ಆದರೇನು ?
ಇಗೋ ನೆಲದ ತಾಯಿ ತೆರೆದಿಹಳು ಬಾಯಿ ! –
ಪಯಣಿಗರೊ ಇಲ್ಲಿ ನಾವು !

ಕಣ್ ತೆರೆದವೇಕೊ, ಮಣ್ ಕರೆವುದೇಕೊ –
ಇದು ಒಡೆಯದಂಥ ಗಾಢ !
ಕಾದಿಹುದು ಗೋರಿ, ಬೇರಿಲ್ಲ ದಾರಿ –
ಎದೆ ನಡುಕವೇಕೊ ಮೂಢ ?

# ಕಾಕೋರಿ *

ಸನೆದ ಕನಸ ಕಳಕೊಂಡ ನನಸ ಪಡೆದಂತೆ ಎನಿಸಿತಿಲ್ಲಿ
ಶಾಂತಿಯಂತರಾಳವನೆ ತುಂಬಿಹುದು ಬೆಳಕು ತುಳುಕಿ ಚೆಲ್ಲಿ

ಮಹಾಸತ್ತ್ವಗಳ ದಿವ್ಯ ಭವ್ಯ ಜೀವನವು ಅಹಾ ಇದುವೇ
ಇದರ ಸೋಂಕಿಗೇ ಜೀವ ಜೀಂಕುತಿದೆ—ತಾನೆ ತಾನು ಅದುವೇ

ಮೇಲಿದೆ ಹರಹಿದೆ ಮುಗಿಲು ಗಗನದ ಧ್ಯಾನ-ಶಾಂತ ಮುದ್ರೆ
ದಿಕ್ತಟಗಳಲೂ ಸಾಗರೋದಕದ ವಿಮಲ ಯೋಗನಿದ್ರೆ

ದೇವಪಥವೆ ತೆರೆದಂತೆ ಜೀವನಿಗೆ ಬೀಯು ಮುಗಿಲ ಕರೆಯು
ಬಾನಂಚಿನ ಬೇಟದ ಕರೆ ಬಂದಿತೊ ನೆಲಕೆನೆ ಅದೂ ತೆರೆಯು!

ಎಂಥ ಬೆಳಕು ಇದು! ಜೀವ ನಲಿವುದೋ ದಿವ್ಯ ದೇಹ ತಾಳಿ
ಈ ಜೀವನದುಸಿರಂತೆ ಬೀಸುತಿದೆ ಅಮೃತದಂಥ ಗಾಳಿ

ಬಣ್ಣ ಬಣ್ಣಗಳ ಬೆರಗು ಮಾತುಗಳ ಬುರುಗು ಇಲ್ಲಿ ಇಲ್ಲ
ಮಹಾ ಮೌನವೇ ಭಾಷೆ ನೀರವವೆ ಶಬ್ದ ಸುತ್ತಲೆಲ್ಲ

ನೆಲದ ಬಾಳೆ ಇದು? ಎನುತ ದಿಗಿಲಿನಲಿ ಕಡಲ ತಡಿಗೆ ಬಂದೆ
ಸುಖದನಂತವೇ ನಿಲುಕಿದಂತಿರಲು ಜೀವ ಚಾಚಿ ನಿಂದೆ!

* ಮುಂಬಯಿಯ ಸಮೀಪದಲ್ಲಿ ಒಂದು ಸಮುದ್ರ ತೀರ.

## ಹಸಿರ ದೇವಿ

ಸುಳಿಗಾಳಿ ಸುಳಿಯಿತು
ಪಿಸು ಪಿಸು ನುಡಿಯಿತು
    ಮರನಲಿದಾಡಿದವು ;
ಬಿರುಗಾಳಿ ಬಂದಿತು
ಏನೋ ಘೋರೆಂದಿತು
    ಮರ ತಲೆಯಾಡಿದವು

ಪಡುವಲ ಸೀಲಿಯನೇರಿ
ಕಾರ್ಮುಗಿಲುಗಳೋಳಿ
    ಭರನೆ ಬಂದೆರಗಿದವು ;
ಹನಿಸೋನೆಗಳ ಹಣಿಸಿ
ಧರೆಯನೆಲ್ಲವ ತಣಿಸಿ
    ಬಾಂದಳದೊಳೊರಗಿದವು

ಸುಳಿವಿಲ್ಲದೆಯೆ ಸುಳಿದು
ಹನಿಸರಗಳನಿಳಿದು
    ಹಸಿರದೇವಿಯುರಳಿದಳು ;
ಗುಡುಗಿನ ತಾಳಕ್ಕೆ
ಇಳಿಮಳೆಯ ಮೇಳಕ್ಕೆ
    ಕುಣಿಯುತ ತೆರಳಿದಳು

ಮೆಲು ಮೆಲು ಮೆಲ್ಲನೆ
ಸೆರಗು ಸಲ ಸಲ್ಲನೆ
ಚೆಲ್ಲುತ ಚಿಮ್ಮಿದಳು ೧
ನೆರೆಯ ಗುಡ್ಡದ ಮೇಲೆ
ಬೀಸಿ ಹಸಿರ ಬಲೆ
ಹಸಿರೊಗರ ಸೂಸಿದಳು

ಬಳಿಯ ಹೊಲಗಳೊಳಿಳಿದು
ಕಲ್ಲಕಲ್ಲ ಸುಳಿಸುಳಿದು
ಹಸಿರನೆ ನೆಗಿಸಿದಳು ೨
ಬೆಳೆಯನು ಮೊಳೆಯಿಸಿ
ತನೆ ತೆನೆ ಒಲೆಯಿಸಿ
ಎಲ್ಲೆಲ್ಲೂ ನಗಿಸಿದಳು

ತೋಪು ತೋಟವ ಸೇರಿ
ಹಸಿರಿನ ಸಿರಿ ಹೇರಿ
ಹಚ್ಚನೆ ಹರಹಿದಳು ೩
ಮರ ಮರ ತಳ ತಳಿರು
ಮಳೆಯೊಳು ಮಿಳಮಿಳಿರು—
ಹೊಸ ಜಗವನೆ ತೆರಹಿದಳು

ಬೇಲಿಗಳ ಕಲಕಲಕಿ
ಗಿಡಗಂಟೆ ಕುಲುಕುಲುಕಿ
ಹೂ-ನಗೆ ಮಗ ಮುಗಿಸಿದಳು ೪
ಹುಲುಗಲ ಬಾಗಿಸಿ
ಎಲೆಬಲೆಯಾಗಿಸಿ
ತೊಂಗಲ ತೂಗಿದಳು

ಹುಲ್ಲಿಂಗಳೊಳು ಸೂಸಿ
ಹಸಿರ ಹಸ್ವನೆ ಹಾಸಿ
ಮಣಿಮಣಿದು ಕುಣಿಕುಣಿದಳು ಽ
ಎಲ್ಲೆಲ್ಲು ಹಸಿ ಹಸಿದು
ಅಲ್ಲಲ್ಲಿ ಹೂ-ಕುಸುರು
ತನ್ನೊಳು ತಾ ತಣಿತಣಿದಳು

ಮೋಡದ ಮುಸುಕೆಳೆದು
ನಗೆಮುಗುಳನು ತೆರೆದು
ಬಿಸಿಯೊಳ್ ಲೀಲೆಯನು ಽ
ಇಣಿಇಣಿಕಿ ಹಣಿಹಣಿಕಿ
ನಲಿವುಲಿವ ಕೆಣಕೆಣಕಿ
ನೇಸರು ಕಂಡನು

ಒಳಒಳಗೆ ನಕ್ಕಿತು
ಬಗೆ ಹಿಗ್ಗಿ ಉಕ್ಕಿತು
ನಾಚಿ ತಲೆವಾಗಿದಳು ಽ
ನಲ್ಲ ನೋಡಿದನೆಂದೊ
ಹುಚ್ಚು ಲಹರಿಯಿದೆಂದೊ
ಎಲ್ಲೋ ಕಣ್ಮರೆಯಾದಳು

## * ಮಧುಮಾಸ

ತಂಪೆಸಿತು ಮಧುಮಾಸದೀ ಬೆಳಗಿನೆಳಗಾಳಿ
ಹುಲ್ಲನ್ನು ಹನಿಗೂಡಿ ಹಸುರಾಗಿರೆ
ಚಿಗುರಾಗಿ ಮೊಗವೆತ್ತಿ ನಳನಳಿಪ ಎಳೆಪೈರು
ಒಳಮುದುರಿ ಹಸುಳೆತನದಲ್ಲಿ ತೋರೆ
ಈ ಮುಂದೆ ತುರುಮಂದೆ ಮುಂದೆಗೋಡುವದಿಲ್ಲ
ಏನೊಂದು ಸೊಲ್ಲು ಸವಿ ಗೊಲ್ಲನುಸುರೆ!

ಹಚ್ಚಗಿನ ಹೊದಿಕೆ ಹೊದ್ದಿಹ ಬನದ ಸಿರಿಯಲ್ಲಿ
ಚೆಲುವೆ ಲಾವುಗೆ ಹಾಡಿ ಹಾಡುವಾಗ
ಗಾನದುನ್ಮಾದವೇರಿದ ಜೀವವಾಳದಲು
ಗರಿವಡೆದು ನಿಗುರುತಿದೆ ಗಗನ–ವೇಗ
ಹಲವು ಕೋಗಿಲೆ, ಚಿಟ್ಟೆ, ಗುಬ್ಬಿ-ಗುಬ್ಬಚ್ಚಿಗಳು
ಕುಕಿಲುವವು ಚೀರಿ ಕರೆಯುವವು ಈಗ.

ಈ ಜವುಳು ನೆಲಗಳೀ ಕಿಕ್ಕಿರಿದ ಹಳುವುಗಳು–
ಚೆಲುವಿಳೆಯ ಮೊಗದ ಮೇಲಿನ ಕಲೆಗಳು–
ಪುಟಿವ ಕಾರಂಜಿಗಳ ಕವಕದಕೆ ಕಾವಲಿಹ
ಎತ್ತರದ ಕಟ್ಟಡಗಳಿಂದ ಮೇಲು.
ಆಹಹ ನಾನೇಕಾಗಿಯಾಗಿ ಕುಳಿತಣಿಸುವೆನು
ಒಂದೊಂದೆ ಬಾಗಿರುವ ಮರದ ಸಾಲು!

* ಡಬ್ಲ್ಯು. ಎಚ್. ಡೇವಿಸ್‌ನಿಂದ

# * ನಿಸರ್ಗ ದರ್ಶನ

ಅರಾಸು

ಧುಮುಕಿ ಮರುದನಿಗೈವ ನಿರ್ಝರ ನಿನಾದವದು
ಮನದಿ ನೆಲಸಿತ್ತು ಸ್ಫೂರ್ತ್ಯೋನ್ಮಾದದಂತೆ. ಉ-
ತ್ತುಂಗ ಶಿಲೆ ನೀಲಿ ಶ್ಯಾಮಲ ಶೈಲ ಹಸುರು ವನ-
ಗತ್ತಲೆಯು ತೀವಿದ ಗಭೀರ ನೀರವ ಕಾಡು
ಅವುಗಳಾ ವೈವಿಧ್ಯಮಯ ರೂಪ ವರ್ಣದಾ-
ವಿರ್ಭಾವಗಳು ಮನವ ಮೋಹಿಸಿದ್ದುವು.

ಕಳೆಯಿತಾ ಕಾಲ; ಮೆಲ್ಲನೆ ಕಳೆದವಾದಿನಾ-
ನಂದ ತೀವ್ರೋಲ್ಲಾಸಗಳು ಜೀವ ಜುಮ್ಮೆನುವ
ಹರ್ಷೋನ್ಮಾದಗಳು. ಅವಕಾಗಿ ದುಗುಡವೆನಿ
ಸದು ಎನಗೆ. ಆ ಕೊರತೆ ತುಂಬಿ ಬಂ-
ದಿಹವಿಂದು ಇನ್ನಿತರ ಹೃದಯ ಪರಿಪಾಕಗಳು.
ಯೌವನದ ಮುಗ್ಧತೆಯೊಳಂತೂ ಅಂತಲ್ಲವು. ನಿ-
ಸರ್ಗವನು ಹೊಸನೋಟದಿಂದ ಕಾಣುವ ಕಣ್ಣ
ಪಡೆದಿಹೆನು.

ಜೀವ ಜಾತಗಳೆಲ್ಲ ಜೀವನಾಂತರದೊಳೋ-
ತಪ್ರೋತವಾಗಿ ಮೌನದಲಿ ಮೊರೆಯುವ ಶೋಕ-
ಸಂಗೀತವನು — ಮನವ ವಿದ್ರವಿಸಿ ಮೃದುಲ ನಿ-
ರ್ಮಲವಾಗಿಸುವ ಮ್ಲಾನಗಾನವನು ಆಲಿಪೆನು.

* ಮಹಾಕವಿ ವರ್ಡ್ಸ್‌ವರ್ಥ್‌ನಿಂದ.

ನವ ಭವ್ಯ ಭಾವನಾನಂದದಿಂವಂತರಂ-
ಗಪ ತರಂಗಮಯವಾಗಿಪನಂಗರೂಪದನು-
ಭಾವವನು ಎಂದೆಂದೂ ಪಡೆದಿಹೆನು. ಸೂರ್ಯಾಸ್ತ
ಗಳ ಸ್ವರ್ಣವರ್ಣದಲೊ, ವರ್ತುಲಾವರ್ತದಲಿ
ನರ್ತಿಪ ಮಹಾರ್ಣವದಲೋ ನಿತ್ಯ ಪ್ರವಹಿಸುವ
ಪವನದಲೊ, ಗಗನದ ಸುನೀಲ ವೈಶಾಲ್ಯದಲೊ
ಮಾನವ ಮನೋಮಂದಿರದಲೋ ನೆಲೆ ನಿಂತು
ಅಖಿಲ ಜಗದಣುರೇಣುವನೆ ಸ್ಫುರಿಪ ದಿವ್ಯ ಚೈ-
ತನ್ಯದಲಿ ತಲ್ಲೀನನಾಗಿಹೆನು.

# ತಾಯನ್ನು ನೆನೆದು

೧

ಈ ಊರ ಬಿಡದೆನ್ನ ಬೆನ್ನ ಬಿಡದೀ ಬೇನೆ
ಪರ ಊರ ಸೇರಿದರೇ ನನಗೆ ವಾಸಿ
ಎಂದಿಲ್ಲಿ ಬಂದಯ್ಯೊ ತಾಯಿ ಜೀವವೆ ! ನಿನಗೆ
ಪರದ ಊರೇ ಕೊನೆಗೆ ಆಯ್ತು ವಾಸಿ ?

ನೀವೆಲ್ಲೊ ಒಬ್ಬೊಬ್ಬರೊಂದೊಂದು ಕಡೆ ತಬ್ಬ-
ಲಿಗಳಾಗಿ ಹೊಟ್ಟೆ ಪಾಡಿಗೆ ಸವೆಯುತಿರಲು
ನಾನಿಲ್ಲಿ ಜೀವಯಾತನೆ ಪಡುತಲಿರಬೇಕು
ನಿಮ್ಮ ನೆನಹೇ ಸವೆಯೆ ಹಗಲು ಇರುಳು

ಒಂದೆ ಗೂಡಿನ ಹಕ್ಕಿ ನಾಲ್ಕು ದಿಕ್ಕಿಗೆ ಚೆದರಿ
ಅಲೆಯುವುದ ನಿಲಿಸಿ ನೆಲೆ ನಿಲ್ಲಬೇಕು ;
ಹೆತ್ತ ಜೀವವೆ ತನ್ನ ಅಕ್ಕರೆಯ ಹಾಲ ಮರಿ-
ಜೀವಗಳಿಗುಣಿಸಿ ಸಲೆ ಸಲಹಬೇಕು

ಅಂದರೇ ರಸಬಳ್ಳಿಯಾಗಿ ಬೆಳೆವುದು ಬಾಳು
ಜೀವನವದಾಗುವದು ತುಂಬು ಬಿಂಬ ;
ಸಂಸಾರ ಸುಕುಮಾರವಾಗಿ ಕುಸುಮಿಸಿದಂದು
ಸುಖ-ಸಮಾಧಾನಗಳು ಮನೆಯ ತುಂಬ

ಎಂದೇನೊ ಗಾಳಿಗೋಪುರ ಕಟ್ಟಿ ನಾವೆಲ್ಲ
ಕೂಡಿರುವ ಎಂದು ಹಾರೈಸಿದು ಬಂದು
ಈಗಾವ ಮುಗಿಲ ಮೀರಿರುವ ಗೋಪುರಕೆ ತಂ-
ಗಲು ನಡೆದೆ ಕಣ್ಣಳವ ದಾಟಿ ನಿಂದು ?

ಗುಣವಾದ ಮೇಲೆ ಮುತ್ತನು ಕೊಡುವೆನೆಂದವ್ವ
ಕೊಡುವ ಮೊದಲೇ ತನ್ನ ತೊರೆದರೆಂದು
ನೆನೆಯುತಿರೆ ನಿನ್ನ ಅಳಲುಕ್ಕುಕ್ಕಿ ಬರಿ ಹಸುಳೆ
ಬಿಕ್ಕಿದಳು ತಂಗಿ ಕಂಬನಿಯ ತಂದು

ಕರುಳನ್ನೆ ಹಿಸುಕಿದಂತಾಯಿತೆನಗೋ ತಾಯಿ !
ತರಳೆಯಾರ್ತಕೆ ಜೀವ ತಲ್ಲಣಿಸಿತು.
ತನ್ನಾತಿಶಯಕೆ ತಾ ಮೂಕವಾಗಿಹ ಶೋಕ
ಕೋಡಿಯೊಡೆಯಲು ಕೊರಳು ತುಂಬಿ ಬಂತು

೨

ಬಾಳ್ಮೊದಲಿನಿಂದ ಮಮತಾಮಾಯೆಯಾಗಿ ಮೈ-
ಮನ ಮುತ್ತಿ ನಿಂತು ನಲಿಯಿಸಿದ ಒಲವೇ !
ನಿನ್ನ ಪ್ರೇಮದ ಜೀವಸಂಜೀವಿನಿಯನೂಡಿ
ನೆಲ ಬಾನ ಹೂತು ಹಿಗ್ಗಿಸಿದ ಚೆಲುವೇ !

ಮನದ ತಳಕೂ ಇಳಿದು ತಣಿಸಿದಾ ಮಾತುಗಳು
ತಪ್ಪಿ ತಕ್ಕೈಪೆವೆಂದೆನುವ ನೋಟಗಳು
ನಿಮ್ಮನೇ ಬಳಸಿರುವೆ ಪ್ರೇಮವಾಹಿನಿಯಾಗಿ
ಸಲಹಿ ನಲಿಯುವೆನೆಂಬ ನಿನ್ನ ಬಾಳು

ಏನಿದೇನಯ್ಯೊ ಹಾ ತಡೆ, ನಿಲ್ಲು, ತೆರಳದಿರು
ಎಂದೆನ್ನ ಜೀವ ಹೌಹಾರಿ ಒರಲೆ
ನಿನ್ನನೆದೆಗವಚಿದಲು ಹಾತೊರೆಯುತಿರೆ ಬಾಡಿ
ಜೊಂಡಾಗಿ ಬೆಳಕಾರಿ ಬತ್ತಿತನಿತರಲಿ

ನೀನಿಲ್ಲ, ನೀನಿಲ್ಲ !–ಯಾರೆಂದವರದನು ಹಾ-
ಗೆನ್ನದಿರಿ ಅಗೊ ತಾಯಿ ಬರುತಲಿಹಳು ;
‘ ಮುದ್ದು ರತುನಾ, ಬಂದೆಯಾ ಬಾರೊ ಬಾ ’ ಎಂದು
ಹಿಗ್ಗಿ ಕಣ್ಣರಳಿ ಎದೆಯುಕ್ಕಿ ನಿಂದಿಹಳು !

ಆದರದೂ ಬರಿ ನೆನವು ! ಬರಿಯ ನೆನವಾದೆಯಾ ?
ನೀನಿಲ್ಲವೆನೆ ಬಾಳು ಗೋಳು ಗೋಳು !
ಕಾಡುಕಾಣುವ ಮೊದಲೆ ಕಣ್ಣಬೆಳಕನು ಸೆಳೆದು-
ದೀ ಭಯಾನಕ ಶೂನ್ಯ ಹಾಳು ಹಾಳು !

‘ ನೀನೆಲ್ಲಿ ? ’ ಎಂದೆಂದು ಕೂಗಾಡಿ ಬರಿ ಬಯಲ
ಬಿಕ್ಕಿಟ್ಟು ತೊಳಲಾಡಿ ಜೀವ ಗೋಳಿಡಲು
‘ ನೀನಿಲ್ಲ ನೀನಿಲ್ಲವಯ್ಯೊ ’ ಎಂದೆನೆ ಬಾನು
ಹೋ ಎಂದು ಮೊರೆಯುತಿದೆ ಅಳಲ ಕಡಲು !

'ಸ್ವಾತಂತ್ರ್ಯ'–೧.

## ಆವೇಶ

ಸೆರೆಯ ದುರ್ಗ ಉರುಳಿತಿಂದು
ಮುಕ್ತಿದ್ವಾರ ತೆರೆಯಿತು
ಭೂ–ವ್ಯೋಮದಪಾರವೇ
ಸುತ್ತಲೆಲ್ಲ ಹರಹಿತು !

ದಾಸ್ಯದುಸಿರು ಕಟ್ಟನಲ್ಲಿ
ಗಾಸಿಗೊಂಡ ದೇಶವೇ
ದಿಗ್ಗನೆದ್ದು ಏರಿ ಬಂತು !–
ಮುಕ್ತಿಯ ಆವೇಶವೇ

ವೈರಿಯ ಮನವನಾಳುತಿಹುದು
ಸೆಳೆದು ವಿಜಯ ಮಾರ್ಗಕೆ
ಲಗ್ಗೆಯಿಡಲು ನುಗ್ಗುತಿಹುದೊ
ಸುಖದ ಸಪ್ತಸ್ವರ್ಗಕೆ !

' ಸ್ವಾತಂತ್ರ್ಯ '–೨.

## ಬಿಡುಗಡೆ

ಆಹಾ ಬಿಡುಗಡೆ! ನೀ ಬಂದಿಳಿದೆಡೆ
ಜೀವಿಜೀವಿಯು ಮರಳಿ ಹುಟ್ಟಿ
ನಿನ್ನ ಹೆಸರಿಗೇ ನಿನ್ನ ಉಸಿರಿಗೇ
ಎದ್ದಿವೆ ಬಾಳ್ಗಣ್ಣನು ಮುಟ್ಟಿ !

ಮಾನವನೀಗಲು ದೇವನೆ ಆಗಲು
ಸಾಕು ನಿನ್ನುಸಿರ ಸ್ವಚ್ಛಂದ–
ಮೈಮನವನ್ನು ಒಂದೆರಡೇನು
ಬಿಗಿದಿವೆ ನೂರ್ಸಾವಿರ ಬಂಧ !

ಎಂದಿಗೆ ಎಂದಿಗೆ ಕೊನೆ ಈ ಬಂದಿಗೆ ?–
ಪ್ರತಿ ಮಾನವ ವಿದ್ಯುತ್ಶಕ್ತಿ ?–
ಈ ಹುಡಿ ಹುಳುವಿಗೆ ನೆಲಬಾನಳವನು
ಬಂದೀಕಾಳಲು ಗರುಡ ಗತಿ ?

'ಸ್ವಾತಂತ್ರ್ಯ'-೩.

# ದೀಪೋತ್ಸವ

ಕತ್ತಲೆಯ ಸಿಂಗರಿಸಿ ದೀಪಮಾಲೆಯ ಕಂಬ
    ಸಾರುತಿವೆ 'ಸ್ವಾತಂತ್ರ್ಯ ಬಂತು ಬಂತು'!-
ನೂರು ಜೀವಗಳ ಸೌದೆಯನುರಿಸಿ ಹೊಗೆ ಕಾರ್ವ
    ಗಿರಣಿ-ಬಂಬುಗಳೊ ಇವು, ಮರೆಯಲೆಂತು?

ಇಗೊ *ಬೀದಿ; ರಾಜಬೀದಿಯ ಕಳೆಯ ತಳೆದಿಹುದು
    ಇಕ್ಕೆಲಕು ಸಾಲುದೀಪಗಳ ಜಲ್ಲಿ-
ಹಗಲಿಗೂ ನಡೆಯುವದು ಸುಲಿಗೆಗಳ್ಳರ ಕೊಳ್ಳೆ,
    ಲಕ್ಷ ಜೀವಗಳೊಡನೆ ಲೆಕ್ಕವಿಲ್ಲಿ!

ತಾಯಾಗಿ ಬರಲಿರುವ ಸ್ವಾತಂತ್ರ್ಯವಿದು ಬಂತೆ
    ಹಣದ ಮಕ್ಕಳ ಮನೆಯ ಸೂಳೆಯಾಗಿ?
ಒಳಗೊಳಗೆ ಕುದಿದೆದ್ದ ಜೀವ ಕನಲುವದು 'ಈ
    ಮೋಸ ಮಾಟವ ಸುಡುವೆ ಹೋಳಿಯಾಗಿ'!

* ಧನಿಕ ವರ್ಗದ ಎಲ್ಲ ಅನಾಚಾರಗಳಿಗೆ ಪ್ರತೀಕವಾದ ಮುಂಬಯಿಯ ಕಾಳಬಾದೇವಿ ರಸ್ತೆ.

‘ ಸ್ವಾತಂತ್ರ್ಯ ’-೪.

## ‘ ನಾವ್ ನಿರಂಕುಶರು ! ’

ಸಾಕು ಮಾಡೊ ನಿನ್ನ ಗುಲ್ಲ ಬರಿಯ ಧ್ವಜಯೆಂಬ ಸೊಲ್ಲ
ಮತ್ತೆ ಹುಂಬ ಕುಣಿತವ !
ನೆಲದ ಒಂದು ತುಂಡಿಗೇಕೊ ‘ ತಾಯಿ ’ ಎಂದು ಸಾಯಬೇಕೊ
ನಡೆಸಬೇಕೊ ಮಣಿತವ ?

ಇಲ್ಲೊ ಸಂತಸದ ಸಂತೆ !.... ಅಲ್ಲೊ *ಲಾ ಒಕೂನಸಂತೆ
ತ್ರಾಣವಿಲ್ಲದೊರಗಿದೆ
ಹಸಿವೆ-ಹಾವ ತೆಕ್ಕೆಯಲ್ಲಿ ಹಿಂಡಿ ಹಿಳಿದು ಹಿಪ್ಪೆಯಾಗಿ
ಜನಜಂಗುಳಿ ಸೊರಗಿದೆ !

ಸಿಳೆ ಮಿಂಚಿನ ಕತ್ತಿ ಮಸೆಯೊ ಬರಸಿಡಿಲಿನ ಕೊಡಲಿ ಎಸೆಯೊ
ಈ ಬಂಧನ ಕಡಿಯಲು ;
‘ ನಾವೊ ನಾವ್ ನಿರಂಕುಶರು ಇಲ್ಲ ಅವನ ಇವನ ವಶರು ’
ಎಂಬ ಬೆಳಕ ಬೀಜ ಬಿತ್ತು
ಅದುವೆ ವಜ್ರ ವಿದ್ಯುತ್ತು–
ಸಾಕು ಸೆರೆಯನೊಡೆಯಲು !

* ಹೆಬ್ಬಾವುಗಳ ತೆಕ್ಕೆಯಲ್ಲಿ ಮಡಿದ ಒಬ್ಬ ಗ್ರೀಕ ಅರಸು.

# ಸುಲಿಗೆಗಾರ

ಶತಮಾನಂಗಳ ಬಸಿರೂ
ಬಂಜೇ ಬಂಜೇ !
ಅದ ಹಾಳಾಗಿಸಿದನ ಉಸಿರೂ
ನಂಜೇ ನಂಜೇ !
ಇವ ಮಾನವನೋ ದಾನವನೋ
ಅರಿವನಾರಿವನು–
ತನ್ನಾಸೆಗೆ ಯುಗ ಗರ್ಭವನೇ
ಹುಡಿಗೂಡಿಸಿದವನು !

ದೇವರ ಮಕ್ಕಳೆ ಈ ಹಿಂಡು
ಮಣ್ಣನು ಮೇಯುತಿದೆ ;
ಮುಗಿಲ ಜೇನ ಹೀರಲು ಬಂದು
ಹುಲ್ಲಿಗು ಸಾಯುತಿದೆ !
ಹುಟ್ಟಿ ತಂದ ಆ ಬೆಳಕೆಲ್ಲೋ
ನೋಯುತೆ ತೇಯುತಿದೆ !

ನರನ ದುರಾಸೆಯು ಎಲ್ಲೆಲ್ಲಿ
ಹಬ್ಬಿತೊ ಅಲ್ಲಲ್ಲಿ
ಆಳಲು ಸಾವಿರ ಬಾಳುಗಳ
ಆಗಿಸಿತಾಳುಗಳ !
ತಾಯಿ ನೆಲವ ಮಲತಾಯಿಯನಾಗಿಸಿತು
ತಿತುಕೋಟಿಯ ಕೂಗಿಸಿತು !

ಬಂದನು ಈ ವಸುಂಧರೆಯನ್ನೇ
ಆದೊಂದು ಒರೆ ಎನ್ನ
ಸೆಳೆಯಿತು ನೂರಾರ್ ಮಿಂಚುಗಳ
ಹೂಡುತ ಸಂಚುಗಳ !
ಬೆಂಕಿಗೈಯು ಮುಂದಕೆ ಚಾಚಿ
ನಾಲ್ಗೆಸೆ ಬಾಚಿ
ಬುವಿ ಒಡೆಯಗೈಯೂ ಅರದಿದೆ
ಇನ್ನೂ ಅರದಿದೆ !
ನರನಾಸೆಯು ಅರದಿದೆ !

ಯುಗಯುಗಗಳ ಗತಿ ಬಂತಿಲ್ಲ–
ಪಿರಿಯುವ ಹೊಂಚಿಲ್ಲ !
ಬಾನೊಡಲನು ಬಂದಿ ಸಿಡಿಲೇ ತುಂಬಿಸುವು
ಎರಗುವೆನೆಂದಿಸುನು !
ಹಾ ಮಾನವ್ಯದ ರಥವನ್ನೇ
ನುಂಗುತ ಭಂಗಿಸಿತೇ –
ನರನಾಸೆಯು ಬಾಯ್ತೆರೆದಿಂದು
ಹಸಿವೆಯು ಹಿಂಗಿಸಿತೇ !
ಶತಶತಮಾನಂಗಳ ಬಸಿರೂ
ಬಂದೇ ಒಂದೇ !
ಹಗಲೇರುವ ಮೊದಲೇ ಬಂತೇ
ಸಂಜೆ ಸಂಜೆ !

# ಇಲ್ಲಿಯ ಜೀವನ

ಜೀವನ ಮನಸಿನಂತೆ ಜೀವನ ಕನಸಿನಂತೆ
ಮೇಲೆ ಬಿತ್ತರಿಸಿಹುದು ನೀಲ ಬಾನು
ಕೆಳಗೆ ಕಂಡರೆ ಕೊಳಚೆಯಲ್ಲಿ ಹೊರಳಾಡುತಿದೆ
ಮನುಜ ನಡೆಸಿಹ ಹಂದಿ-ಬಾಳು ತಾನು.

ನಡುವಿಲ್ಲಿ ಸುಖವೆ ಜೀವಕೆ ಮತ್ತೆ ? ಇದು ಕಣಾ
ಮೂರು ಮಾಳಿಗೆ ಎತ್ತರದ ತ್ರಿಶಂಕು
ಹಾದಿಬೀದಿಗಳಲ್ಲಿ ಮನುಕುಲದ ಬೀಳ್ಗತೆಯೆ
ಹರಹಿರಲು ಮನವು ಅನುದಿನವು ಮಂಕು.

ಇಲ್ಲಿಯ ' ಚೆಲುವ 'ನೇನು ಬಣ್ಣಿಸಲಿ ? ಇಗೊ ' ಉಷೆ 'ಯು!
ಕಳೆಗೆಟ್ಟ ಮೂಡಲಲಿ ಬೂದಿ-ಬೆಳಕು
ಇದ ಸ್ವಾಗತಿಸೆ ಎದುರು ಮೋಳಡಿದ ಮರದಲ್ಲಿ
ಹಕ್ಕಿ, ಕೇರಿಯು ತುಂಬ ನಾರುಕೊಳಕು.

ಮತ್ತೆ ಹೊರಟಿತು ನರನ ಹಿಂಡು ಹುಸಿ ಬವಣೆಯಲಿ—
ಏಕೊ ಏನೋ ಬಾಳ್ವೆವೆಂಬ ಛಲವು !
ಈ ಕಿಕ್ಕಿರಿದ ಮನೆಯ ಸಾಲು, ಈ ಹೊಗೆ ಹೊಲಸು—
ಬೇನೆ ಬಿದ್ದಿಹುದಿಲ್ಲಿ ಬುವಿಯ ಚೆಲುವು !

ಮತಿಗೇಡಿ ಮಾನವನ ಗತಿಗೇಡಿ ಬಾಳಿದುವೆ
ಇಂಥವನು ಇದ್ದರಿರದಿದ್ದರೊಂದೆ.
ಈ ದುರಂತವ ನೆನೆಯುತಿರಲು ಮನಕೆನಿಸುವದು
ಏನೇನು ಕಾದಿಹುದೊ ಇನ್ನು ಮುಂದೆ ?

# ನೆಲದ ಮಗ

ಅಗೋ ನೋಡು ಒರಟು ಮರ
ವಿಕಾರವಾಗಿ ನಿಂತಿದೆ
ಸುತ್ತಲೆಲ್ಲ ಬರಟು ನೆಲ
ಹಾಳುಗನಸಿನಂತಿದೆ.
ಈ ಬಂಜೆ ಹಾಳಿನಲ್ಲಿ
ಹೇಗೊ ಬಿತ್ತಿ ಹೇಗೊ ಬೆಳಸಿ
ಹಸಿವೆಯೆಂಬ ಶಾಪವನ್ನು
ಹುಟ್ಟುಬಂದ ಪಾಪವನ್ನು
ತೊಡೆಯಲೆಂದು ತೊಳಲಿ ಸೋತು ನಿಂತ ನೆಲದ ಮಗನದೋ !

ಶತಮಾನಗಳು ಸವೆದೂ
ಹಡೆದುದೇನು ಪಡೆದುದೇನು
ಈ ಆಕೃತಿ, ಈ ವಿಕೃತಿ!–
ಈಸು ಕಾಲ ನಡೆದುದೇನು ?
ಯುಗಯುಗಗಳ ಶೂನ್ಯವೇ ಇವನ ಕಣ್ಣೊಳಿದೆ
ಯುಗದ ಭಾರ, ಜಗದ ಭಾರ ಬೆನ್ನಮುರಿದು ಬೀಳಿದೆ
ಆಸೆ ಎಂದೋ ಸತ್ತಿದೆ
ಬೆಳಕು ಎಂದೋ ಬತ್ತಿದೆ.
ಹಸಿವೆಯನ್ನೂ ಜೀವತಿನ್ನುತಿಹುದು ಎಂಬ ಕಾಟಕೆ,
ಈ ಬಂಜೆಮಣ್ಣೂ ಅನ್ನವೀವೆನೆಂದು ಕರೆವ ಮಾಟಕೆ,
ಜೊತೆಯ ದನಕೆ ಅಣ್ಣನಾಗಿ
ನೊಗವ ಹೊತ್ತು ಸುತ್ತುತಿಹನು.
ನವೆದು ನಿರ್ವಿಣ್ಣನಾಗಿ
ಹಾಳು ನೆಲವ ಬಿತ್ತುತಿಹನು
ದುಡಿದು ಸೋತ ನೆಲದ ಮಗನು !

ಗಾಳಿ ಬೆಳಕ ನೀರ ನೆಲವ ಆಳಲೆಂದು ಬಂದ ಚೆಲುವ
ದೇವಾಂಶನು ಇವನೆ ಏನು ?
ಚಿಕ್ಕ ಬಳಗ ತುಳಿವ ಹಾದಿ ಹಿಡಿದು, ಬಾನ ಬಯಲಿ ಏರಿ
ಯಲ್ಲಿ ಬಲವನರಸ ಬಂದ
ದೇವ ಸಂಭೂತನೇನು ?
ಅನಂತದೊಂದು ಉಸಿರಸೋಂಕಿಗಾಗಿ ಬಯಸಿ ಹಸಿದು ತೇಂಕಿ
ಬಂದ ಜೀವನಿವನೆ ಏನು ?

ಈ ವಿರೂಪ ಕಂಡರಯ್ಯೊ ಎದೆಯು ನಡುಗಿ ಝಲ್ಲೆನುವದು
ಇವನು ಸುಲಿದ ಇದನು ತುಳಿದ ಸರನೆದೆ ಕಲ್ ಕಲ್ಲೆನುವದು
ಈ ಗಾಣದೆತ್ತಿಗೇನು
ನಿಮ್ಮ ವೇದ, ಉಪನಿಷತ್ತು, ವಿಜ್ಞಾನದರ್ಶನ,
ಗಾನಲಹರಿ, ಚಿತ್ರಲಿಪಿತ, ಸತ್ಯದಮೃತ ಸ್ಪರ್ಶನ ?
ಒಂದೆ ಒಂದೆ ಒಂದೆ ಒಂದೆ
ಜಗದ ಕುರುಡು ಸ್ವಾರ್ಥವೊಂದೆ
ಇವನ ಮೈಯನುಂಡಿತು, ಇವನ ಜೀವ ಹಿಂಡಿತು
ಅವನೆ ಅದನೆ ನೆನೆದು ಕನಿಸಿ ಇವನ ಮೌನ ಕೂಗುತಿದೆ
ಇಳೆಯನಾಳ್ವ ಬಲವಂತರ ಕೈವಾಡಕೆ ರೇಗುತಿದೆ
ಸೊಗವನೆತ್ತಿ ಒಗೆದೆಸೆಂಬ ಹೊಂಚಿನಲ್ಲಿ ನೂಗುತಿದೆ

ಏಳಲಿಹುದು ಏಳಲಿಹುದು
ಒಂದು ದಿನದಲೇಳಲಿಹುದು
ಈ ಹಸಿದ ಮೈಯೂ, ಕುಸಿದ ಕೈಯೂ ಕನಲಿ ಕೆರಳಿ ಏಳಲಿಹುದು
ಬಿರುಗಾಳಿಯು ಕೂಗಿನಿಂದ
ಮೂಜಗವನೆ ನಡುಗಿಸುತ್ತ
ನೆಲದೊಡೆಯರ ಕೇಳಲಿಹುದು !
ತನ್ನ ತುಳಿದ ಸುಲಿದ ಕತೆಗೆ ಒಂದುತ್ತರ ಕೇಳಲಿಹುದು !

# ಯುದ್ಧ

ಯುದ್ಧ ಬಂತು ! ಯುದ್ಧ ಬಂತು !
ಮಾನವನೋ ದಾನವನೊ ದೇವನನ್ನು ಮೆಟ್ಟಿ ನಿಂತು
ಬಾನ ಬಯಲ ಗದಸಿ
ಮೇದಿನಿಯನು ಅದುರಿಸಿ
ಕಾರ್ಗಡಲನು ಬೆದರಿಸಿ
ದೇವ ಸಲಹಿ ಕಾಯ್ದುದೇನು ತಾನೊ ಸುಲಿದು ಕೊಲುವೆನೆಂದು
ಕಾವ ದೇವಶಕ್ತಿಗಿಂತ ಕೊಲುವ ಕೈಯೆ ಮಿಗಿಲು ಎಂದು
ತನ್ನ ಕೈಯೆ ಮಿಗಿಲು ಎಂದು
ಮೂದಲಿಸಿ ಬೀಗಿ ನಿಂದು
ಸೇಡ ಮೋರೆ ಗಂಟನಿಕ್ಕಿ
ಕೊಲೆಯ ಕಣ್ಣ ಹೊಂಚ ಹಾಕಿ
ಬಾಂಬಯಲಿ ತುಂಬ ಬರಿಯ ಬಾಂಬರುಗಳ ಹಿಂಡನಲೆಸಿ
ಬೆಂಕಿ-ಬೀಜಗಳನೆ ಬಿತ್ತಿ
ಭುಗಿಲ್ಲೆಂದು ಜಗಿವ ಜ್ವಾಲೆಗಳ ಕೆರಳಿದ ಬೆಳೆಯನೆತ್ತಿ
ಇಳೆಯ ಚೆಲುವೊ ಹುಲ್ಲುಕರಿಕೆ
ಯೆಂದು ಅದನು ಕರಿಕುವರಿಸಿ,
ಇಳೆಯ ಒಲವೊ ಬಂಜೆ ಬಯಕೆ
ಯೆಂದು ಅದನು ಹಿಂಡಿ ಹೀರಿದು,
ಇಳೆಯ ನಲವೊ ಬರಿಯ ಬವಣೆ
ಯೆಂದು ಅದಕೆ ಉರುಲನಿಕ್ಕಿ,
ಹಾಕಿ ಸಲಹುವವನ ಮೇಲೆ ಸುಟ್ಟು ಗೆಲುವ ಕೋರಿದ !
ಮನೆ-ಮಂದಿರ ಮೆರೆಯುವಲ್ಲಿ ಮಸಣಛಾಯೆ ತೋರಿದ !
ಸಿರಿಯುದೆಯದೊ ಕೆಂಡವಾಯ್ತು
ಬಂದುದನ್ನು ನುಂಗಲೆಂದು ಬಾಯ್ದೆರೆದ ಕೊಂಡವಾಯ್ತು !

ಈ ಬೆಂಕಿ ಮಡುವೊಳಯ್ಯೊ
ದೇಶ ಹುರಿದು ಹೊರಳಿದುವೊ
ಹೊಳಲು ಚೀರಿ ಉರುಳಿದುವೊ
ಜೀವ ಜಾತಿ ನರಳಿದುವೊ
ಬೆಂದು ಉರಿದು ಒರಲಿದುವೊ !
ಈ ವಿಶ್ವಮೇಧ-ಮದವದೇರಿ ಹಿಗ್ಗಿ ನಕ್ಕನಲಾ
ಅದೊ ರಕ್ಕಸ ನಕ್ಕನಲಾ
ಉರಿ–ಸೀರನೆ ಬಿಡುತ ಅವನ ಕೆನ್ನಾಲಗೆ ನೆಕ್ಕಿತಲಾ !
ನಾಲ್ಕೂ ದಿಕ್ಕ ನೆಕ್ಕಿತಲಾ !
ಅವನ ವಿಷದ ಉಸಿರ ಹಬೆಗೆ ಹಸಿವೆ ದಾಳಿ ಇಟ್ಟಿತೋ
ಕಾಲಪಾಶದಂತೆ ಬೀಸಿ ಬಂದು ಪ್ರಾಣ ತಟ್ಟಿತೋ
ಅದರ ರುಕ್ಷಸ್ಪರ್ಶಕಯ್ಯೊ ಜೀವಸೆಲೆಯು ಬತ್ತಿತೋ
ಬೆವತು ಬಾಡಿ ಬೆಂಡಾಗಿ ಜಗದ ಜೀವ ಸತ್ತಿತೋ !
ಹರಣ ಹೀರಿ ಹೆಣವ ಮಾಡಿ
ತಿರೆಯನುರಿಸಿ ಚಿತೆಯ ಹೂಡಿ
ಸುಡುತ ಭೂತಲೀಲೆಯಾಡಿ
ಹುಚ್ಚೆದ್ದು ಮಣಿದನು
ಕೊಲುವ ದುಂದಿನಲ್ಲಿ
ಕಾಳನಂತೆ ಕುಣಿದು ತಣಿದನು !

× × × ×

ಅದರೇನು ಅದರೇನು
ಗಾಳಿ ನೀರು ನೆಲವು ಬಾನು
ರಾವು ಬಡೆದು ನಿಂತರೇನು
ಏಸು ಕಾಲವೆಂತು ತಡೆವುದೀ ಪಿಶಾಚ ನರ್ತನ ?
ಹುಂಬ ಮೈಯ ಕಸುವು ಮುಕ್ಕಿ
ಮುರಿವ ಕಾಯಕಕ್ಕೆ ಸೊಕ್ಕಿ
ಕೊಲೆಯು ಕಾವೆ ನೆತ್ತಿಗುಕ್ಕಿ

ಸುಡುವ ತನ್ನ ಕೈಯ ತಾನೆ ತಲೆಯ ಮೇಲೆ ಇಟ್ಟನು
ಹುಚ್ಚು ಕುಣಿದು ಕೆಟ್ಟನು
ಭಸ್ಮಾಸುರನಂತೆ ಬೂದಿಯಾಗಿ ಉರುಳಿ ಕೆಡೆದನು
ಮಾನವನೊಳ ದೇವನನ್ನು ಮೆಟ್ಟಿ ಕುಣಿದ ದಾನವನದೊ
ತಾನು ಹೊತ್ತಿಸಿಟ್ಟ ಕೆಂಡದುರಿಯ ತಾನೆ ತೊಡೆದನು !
ಯುದ್ಧ ಬಂತು ಯುದ್ಧ ಹೋಯ್ತು
ಯುದ್ಧ ಹೋಯ್ತು ಯುದ್ಧ ಹೋಯ್ತು !

# ಭಯದ ಗೀತ

ಭಯದ ಗೀತ ಹಾಡು ಕವಿಯೆ, ಲಯದ ಗೀತ ಹಾಡು
ಅಣುವಿನಂಥ ಅಣುವು ಕೂಡ ಕೊಲಲು ಬಂತು ನೋಡು !

ಮನದ ವಜ್ರಮುಖವನೊತ್ತಿ
ಇಳೆಯ ಹೂವಿನಂತೆ ಮೂಸಿ
ಅದರ ಎದೆಯ ರಸವನೀಂಟಿ
ಅದರ ಸವಿಯ ಅದರ ಕಹಿಯ
ಅರುಹಬೇಕು ಎನ್ನುತಿರುವೆ

ಮೇಲೆ ಕೆಳಗೆ ಅತ್ತ ಇತ್ತ
ತಿರುವಿ ನಿನ್ನ ಯಕ್ಷನೇತ್ರ
ಬಾಳೆತ್ತರ ಬಾಳಿನಾಳ
ಅಳೆಯಬೇಕು ಎನ್ನುತಿರುವೆ

ಎನಿತು ರಮ್ಯ ಅನಿತಗಮ್ಯ
ವೇನಿದಾವ ಲೀಲೆಯೋ !
ಇವರ ಗೂಢವರಿಯಬೇಕು—
ಆಹಾ ಆಹಾ ಅಷ್ಟೆ ಸಾಕು
ಎಂದು ತವಕ ಪಡುತಲಿರುವೆ

ಅಗೋ ನೋಡು ಬಂತು ಬಂತು ನಿನ್ನ ಚಿಂತನಕ್ಕೆ ಅಂತ
ಇನ್ನು ಚಿಂತೆ ದಿಗ್ದಿಗಂತ
ಮೀರಿ ಮುತ್ತಿ ಮುಸುಕಿಬಹುದು !

ಸ್ವಂತ ನೆಲವೆ ಸಾವ ಹೆತ್ತು ನುಂಗಲಿರುವವಂತೆ ನಾಳೆ—
ಚೀರು 'ಕೊನೆಯ ಬಾತು' ಎಂದು ಜಗದ ಜನದ ಕಿವುಡ ಸೀಳೆ !

'ಕಾಲಕೊಡೆದ ಸನೆಯು. ಗೊನೆಯು
ಸದಸು. ಇವನ ಕೈಯ ಕೊನೆಯು
ನಾಕಹನ್ನೆ ನಿಲುಕಲಿಹುದು ಇಂದು ನಾಳೆ, ಎಂಬ ಸುಳ್ಳ
ಇನ್ನು ಮರೆಯೊ. 'ಕಡೀ ಕೊಲ್ಲು' ಎಂಬುವನ್ನೆ ನರನು ಬಲ್ಲ !–
ಅಂತೆ ಕೂಗಿನಳತೆಯಲ್ಲಿ ವಿಲಯ ಬೀಡ ಬಿಟ್ಟಿತಿಂದು !
ಸೊಲ್ಲಿಸಸಿಯು ಬೇಡ; ಚೀರು, ಕೊನೆಯ ಬಾತು ಕೇಳಿರೆಂದು

'ಅವರಯ್ಯೋ ಇಗೋ ಇಲ್ಲಿ
ಅಂತರಂಗ ರಂಗದಲ್ಲಿ
ಚಿತ್ರದಂಥ ಚಿತ್ರಲೇಖೆ
ಊಹೆಯಂಥ ಮೋಹಮೋಖೆ
ಬರೆವರಹಾ ದಿವ್ಯರೇಖೆ
ಅವುದೋ ಸ್ವರ್ಣ ಸಮುರ್ಕಂದಕೆ,
ಎಂದು ನೆನಸಿ ಮರುಗಬೇಡ
ಇಲ್ಲವಂಥ ಕನಸಕಟ್ಟಿ ಒಡೆಯಿತೆಂದು ಕೊರಗಬೇಡ

ಅದರೆಲ್ಲ ಆಗಬಹುದು
ಅವರದನು ಗೈವರಾರು ?
ಮುಗಿಲ ಮಲರ ಮೂಸಬಹುದು
ಕೈಯ ಚಾಚಿ ಕೊಯ್ವರಾರು ?
ಹಗಲು ಇರುಳು ಹಿಗ್ಗಿನನ್ನವನ್ನೆ ಉಣ್ಣಬಹುದು ಅದನು
ಬತ್ತಿ ಬೆಳೆಸಿ ಒಯ್ವರಾರು ?
ಬತ್ತಿ ಬೆಳೆಯ ಬಂದ ನರನೆ
ಶಾಪಮೂಢನಂತೆ ಇಂದು

ಕಾಳನೊಡನೆ ಶಿಳ್ಳಿಯಾಡ
ಲೆಂದು ಕೈಯತಟ್ಟಿ ನಿಂದು
ಕೂಗಿ ಕೆಲೆವನೆಂದ ಮೇಲೆ
ಮುಗಿಯ ಬಂತು ಕತೆಯು! ಪ್ರಳಯವೆರಗಿ ಗುಟುರು ಹಾಕೆ, ಬೆದರಿ
ನರನ ಶಿಳ್ಳಿಯೊಂದು ಬಿಡದೆ ಚೆಲ್ಲಿಪಿಲ್ಲಿಯಾಗಿ ಚೆದರಿ
ಮಣ್ಣೊಳಡಗಲಿಹುದು, ಅಕೋ! ಬಂತು ಬಂತು ಕೇಡು!
ಭಯದ ಗೀತ ಹಾಡು ಕವಿಯೆ, ಲಯದ ಗೀತ ಹಾಡು!

## ಶಾಂತಿಗೀತ

ಗಾಳಿ ಬಿತ್ತಿ ಬಿರುಗಾಳಿಯ ಬೆಳೆಸಿ
ಉರಿಯನುತ್ತು ಹೆಬ್ಬುರಿಯನೆ ಮೊಳೆಸಿ
ಏನಿದು ಪಾತಕವೆ ಮನುಕುವರ !
ಇಲ್ಲದ ಭೂತವ ಕರೆಯುಸಿ ತಂದೆ;
ತನ್ನ ತನ್ನವರ ಕಾವೆನು ಎಂದೇ
ಕೊಲಲು ನಿಂತೆ ನೀ ನಿನ್ನವರ !

ಸುಖ-ಶಾಂತಿಗಳನು ನಿಲಿಸುವೆಯಲ್ಲೇ ?
ಅದಕೇಕೇ ವಿಧ್ವಂಸನ ಲೀಲೆ ?
ಕೈ ನಡೆವನಕವು ಕಡಿವ ಪಣ ?
ಉರಿಯುವೆ ತರಿಯುವೆ; ಏನಿದು ನಡೆಯೋ ?
ಚೀರುವೆ ಹಲುಬುವೆ ನುಂಗಲಿದೆಯೊಡೆಯೋ ?
ನರಕುಲವೋ ಅರೆಸತ್ತ ಹೆಣ !

ನಿನ್ನ ಹಸಿವೆ ನಿನಗಾಯಿತೆ ಮುಳುವು
ಅನ್ನದ ಬನ್ನದಿ ಹುಟ್ಟಿತೆ ಅಳುವು ?–
ಬಾಳಲಿ ಗೋಳಿದು ಎಂಬೆಯಲಾ ?
ಜೀವನ ಲಾಲಿಸಿ ಪಾಲಿಸಿದಿಳೆಯು–
ಹಬ್ಬಲು ಹಗೆ–ಹೋರಾಟದ ಬೆಳೆಯು–
ಸಾವಿನ ನೋವಿನ ಹಾಳುಹೊಲ !

ಜೀವಕುಲಕೆ ನೆಲವೆಲ್ಲವು ಅನ್ನ
ಅದನೆಲ್ಲವ ನೀನೊಬ್ಬನೆ, ಅಣ್ಣ,
ನುಂಗಲು ನಾಲಗೆ ಚಾಚಿದರೆ

ಮುರಳಿ ನಿನ್ನನದು ನುಂಗದೆ ಇಹುದೇ
ನರಳಿ ಒರಲಿದರು ತಾಗಲು ಬಹುದೇ
ನೆಲಮುಗಿಲನು ಉರಿ ಬಾಚಿದರೆ ?

ಪಾಲುಗಾರಿಕೆಯೆ ಕೊಲೆಪಾತಕವೊ
ದಾಯಾದಿತನವೆ ಕುಲಘಾತಕವೊ !–
ಕುದಿಕುದಿದೆದ್ದಿತು ನೆಲದೆದೆಯು
ಬಾನ್ ಕನಲಿತು ಮರಣದ ಕರೆ ಕೇಳಾ
ಕಡಲ್ ಕೆರಳಿ ತೆರೆನೊಂಕಿತು ಬೀಳಾ
ನೀನೇ ನಿನ್ನಯ ಹತವಿಧಿಯು !

ಹೆತ್ತೊಡಲಿಗೆ ನೀ ಎರಡನು ಬಗೆದೆ
ಒಡಹುಟ್ಟಿದವರ ತುತ್ತನು ತೆಗೆದೆ–
ತಿನುವನ್ನವೆ ತಿನ್ನಲು ಬಾತು !
ಭುಗಿಲೆನೆ ಹತ್ಯಾಕಾಂಡದ ಕುಂಡ
ಹಾ ಹಾ ಸ್ವಾಹಾ ಈ ನರಪಿಂಡ !–
ಆದಿಯಲೇ ಅಂತವೆ ಇಂತು ?

ವಿಜ್ಞಾನವೊ ಆದು ಯಕ್ಷನ ಕಣ್ಣು
ವಿಶ್ವವೆ ತೆರೆವುದು ತನ್ನೆದೆಯನ್ನು–
ಹರುಹಿತು ಆದೊ ಹೆಗ್ಗಿನ ಹಾದಿ !
ರಕ್ಷಣಕಲ್ಲದೆ ಭಕ್ಷಣಕೆನಲು
ಮುಕ್ಕಣ್ಣನ ಕಣ್ಣಿನ ಉರಿಹೊನಲು
ಹರಿಯಿತಲಾ, ನೀ ಹಿಡಿಬೂದಿ !

ನೀ ಬಗೆವರೆ ಮಣ್ಣೇ ಹೂ-ಹಣ್ಣು
ನೆಲದಲಿ ನಾಕವೆ ತೆರೆವುದು ಕಣ್ಣು
ವಿಶ್ವಕರ್ಮನೋ ನೀ ಮನುಜಾ !

ಇದನೇಕೋ ನೀ ಮರೆದೆ ತೊರೆದೆ
ಕೊಲೆ ತಲೆಗೇರಿರೆ ಸಾವನೆ ಕರೆದೆ–
ತಗಲಿತೆ ಆತ್ಮಾಹುತಿಯ ರುಜಾ ?

ನಿನ್ನಾಳವ ನೀ ಧುಮುಕಿ ಅಳೆದೆಯಾ
ನಿನ್ನೆತ್ತರಕೂ ಎದ್ದು ಬೆಳೆದೆಯಾ
ನಿಲುಕಿತೆ ನಿಲುಕಿಗೆ ನಿನ್ನಗಲ ?
ಎಂತಹ ಭವ್ಯಸ್ವರೂಪನೊ ನೀನು !
ತೋರೋ ನಿನ್ನ ವಿಭವ ವಿಲಸವನು–
ಕಾದಿಹ ಜಗ ಕಾಣಲಿ ದಿಗಲ

ಯುಗಯುಗಗಳು ತಪಿಸಿದವೋ ಪಡೆಯಲು ನಿನ್ನಾ
ಹುಸಿಯೋ ಭೂಮಿಯು ಬಸಿರಿನ ಬಯಕೆಯ ಬನ್ನಾ ?
ಜಗದಾಸೆಗಳೋ ಕುಳಿತಿವೆ ನಿನ್ನನೆ ನಂಬಿ !–
ಎಂದಿಗೆ ಆ ಅಮೃತೋದಯ ಬಗೆ-ಬಾನ್ ತುಂಬಿ ?
ಬರಿ-ನೆನಪಿನ ಬಳುವಳಿ ಬಿಡುವರೆ ಈ ಧರೆಗೆ ?
ಏಳ್ ನಡೆ ಓಗೊಡು ಕಾದಿಹ ಕಾಲದ ಕರೆಗೆ
ಕಾದಿಹ ಕಾಲದ ಕರೆಗೆ !



**ಗಂಗಾಧರ ಚಿತ್ತಾಲ:** ಹುಟ್ಟಿದೂರು ಉತ್ತರ ಕನ್ನಡದ [illegible]ಹಳ್ಳಿ. ಕುಮಟಾ, ಧಾರವಾಡ, ಸಾಂಗ್ಲಿಗಳಲ್ಲಿ ಶಿಕ್ಷಣ [illegible] ಇಂಗ್ಲಿಷು ಸಾಹಿತ್ಯವನ್ನೇ ಮುಖ್ಯ ವಿಷಯವಾಗಿಟ್ಟು ಕೊಂಡು ಬಿ. ಎ. ಪರೀಕ್ಷೆಯಲ್ಲಿ ಆನರ್ಸ ಆಗಿದ್ದಾರೆ. ಸದ್ಯ ಇವರು ಇರುವದು ಮುಂಬೈಯಲ್ಲಿ. ವಯಸ್ಸು ೨೫.

ಮೇಟ್ರಿಕ್ ಪರೀಕ್ಷೆಯಲ್ಲಿ ಮುಂಬೈ ಯುನಿವರ್ಸಿಟಿಗೆ ಮೊದಲನೇ[illegible] ಕೀರ್ತಿವೆತ್ತ ಚಿತ್ತಾಲರು ಕೇಂದ್ರ ಸರಕಾರದಿಂದ [illegible] ವರ್ಗದ *(Class I)* ಅಧಿಕಾರಕ್ಕೆ ಆರಿಸಲ್ಪಟ್ಟಿದ್ದಾರೆ.

ಮುಂಬೈ ಜೀವನದ ಬಿಡುವಿನಲ್ಲಿ ತಮ್ಮ ಸ್ಫೂರ್ತಿಗೆ ಹಾಡಿ[illegible] ಕವನಗಳಲ್ಲಿ ಇಷ್ಟನ್ನು ಇಲ್ಲಿ ನೀಡಿದ್ದಾರೆ. ಇಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ, ನೈತಿಕ ವಿಷಮತೆಗಳ ಚಿಂತನೆಯು [illegible] ಕಾಲದ ಕರೆ' [illegible]ಪ್ರಥಮ ಕೃತಿ.